# ಹರಿದಾಸರ ಮುಂಡಿಗೆ

ನಾಗರಾಜು ಹಾವೇರಿ–ಪಲ್ಲವೀಪ್ರಿಯ–ಬೆಂಗಳೂರು–9901052578

ಈ ಪದವು ಶ್ರೀಲಕ್ಷ್ಮೀದೇವಿಯನ್ನು ಕುರಿತು ಶ್ರೀಕನಕದಾಸರ ವದನಾರವಿಂದದಲ್ಲಿ ಹರಿದು ಬಂದ ಮೃದುಮಧುರ ವಚನ.

ಜಗನ್ಮಾತೆ ಲಕ್ಷ್ಮೀದೇವಿ ಕೋಮಲಾಂಗಿಯಾದ ನೀನು ಯಾವ ಗುಣವನ್ನು ಮೆಚ್ಚಿ ಶ್ರೀಹರಿಯನ್ನು ವರಿಸಿದೆ? ಏನು ಇಲ್ಲದ ಗೋಪಾಲಕನು ಹಾಗೂ ಕುಲವೂ ತಿಳಿಯದವನಾದ ಶ್ರೀಹರಿಯನ್ನು ಏನನ್ನು ನೋಡಿ ಇಷ್ಟಪಟ್ಟೆ ಹೇಳಮ್ಮಾ ಎಂದು ಜಗನ್ಮಾತೆಯಾದ ಲಕ್ಷ್ಮೀದೇವಿಯನ್ನು ಕೇಳುತ್ತಿದ್ದಾರೆ.

ಎಲ್ಲರೂ ಗಮನಿಸಬೇಕಾದ ವಿಷಯವೇನೆಂದರೆ, ಹರಿದಾಸ ಪರಂಪರೆಯಲ್ಲೇ ಶ್ರೀಕನಕದಾಸರಿಗೆ ಅತ್ಯಂತ ವಿಶಿಷ್ಟವಾದ, ವಿಭಿನ್ನವಾದ, ವೈಶಿಷ್ಟ್ಯ ಪೂರ್ಣವಾದ ಸ್ಥಾನವಿದೆ. ಕಾರಣ ಶ್ರೀಕನಕದಾಸರು ಸಾಕ್ಷಾತ್ ಯಮಾಂಶ ಸಂಭೂತರೂ, ದಕ್ಷಿಣದಿಕ್ಕಿನ ಅಭಿಮಾನಿ ಹಾಗೂ ೧೨ ಕಕ್ಷೆಯಲ್ಲಿರುವ ದೇವತೆ.

ಶ್ರೀಕನಕದಾಸರ ಸಾಹಿತ್ಯವನ್ನು ಅವಲೋಕಿಸಿದರೇ ಅವರ ಪ್ರತಿಯೊಂದು ಸಾಹಿತ್ಯವೂ ಬಹಳಷ್ಟು ವಿಶೇಷಗೂಢಾರ್ಥಗಳಿಂದಲೂ, ವಿಶೇಷಣಗಳಿಂದಲೂ, ಭಾವಪೂರ್ಣವಾಗಿಯೂ, ಅರ್ಥಪೂರ್ಣವಾಗಿಯೂ, ಬಹುಸತ್ವಪೂರ್ಣವಾಗಿಯೂ ಇವೆ. ವೇದ, ಉಪನಿಷತ್, ಪುರಾಣ, ಇತಿಹಾಸ, ಶಾಸ್ತ್ರಜ್ಞಾನವಿಲ್ಲದಲೇ ಇವರ ಸಾಹಿತ್ಯವನ್ನು ಮುಟ್ಟಿದರೇ ಏನೂ ಅರ್ಥವಾಗುವುದಿಲ್ಲ. ಆದಕ್ಕಾಗಿಯೇ ಸಾಹಿತ್ಯ ಪ್ರಪಂಚದಲ್ಲಿ ಇವರನ್ನು ಕುರಿತು ಒಂದು ನಾಣ್ಣುಡಿಯೇ ಇದೆ. ಕನಕನ ಕೆಣಕ ಬೇಡಿ – ಕೆಣಕಿ ತಿಣಕ ಬೇಡಿ.

ಶ್ರೀಹರಿವಾಯುಗಳಿಗೆ ಮತ್ತು ಶ್ರೀವ್ಯಾಸರಾಜ, ಶ್ರೀವಿಜಯೀಂದ್ರ, ಶ್ರೀವಾದಿರಾಜರಿಗೆ ಅತ್ಯಂತ ಪ್ರಿಯರಾದ ಹಾಗೂ ಯಮಾಂಶ ಸಂಭೂತರಾದ ಶ್ರೀಕನಕದಾಸರ

ವಿಶೇಷ ಅನುಗ್ರಹದಿಂದ ಅವರ ಒಂದು ಪದದ ಅರ್ಥವನ್ನು ಬಿಡಿಸಲು ಪ್ರಯತ್ನಸುತ್ತಿದ್ದೇನೆ.

ಏನೇ ಮನವಿತ್ತೆ ಲಲಿತಾಂಗಿ
ಅಸಮಾನಗೋವಳ ಕುಲವಿಲ್ಲದವನೊಳು ‖ ಪಲ್ಲವಿ ‖
ಮಗಗೆ ಮೈದುನನಾದ ಮಗಳಿಗೆ ಪತಿಯಾದ
ಮಗಳಿಗಳಿಯನಾದ ಅಳಿಯಗಳಿಯನಾದ ‖ ಚರಣ ‖
ಮಗಳ ಮಗಗೆ ಮೈದುನನಾಗಿ ಮಾವನ
ಜಗವರಿಯನುಕೊಂದ ಕುಲಗೇಡಿ ಗೋವಳ ‖ ಚರಣ ‖
ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ
ಚಿತ್ತ ಒಲಿದು ಚೆನ್ನ ಆದಿಕೇಶವನೊಳು ‖ ಚರಣ ‖

## ಮಗಗೆ ಮೈದುನನಾದ

ತನ್ನ ಮುಖದಿಂದ ಸೃಷ್ಟಿಸಿದ ತನ್ನ ಮಗನೆನಿಸಿದ ಇಂದ್ರ, ಇಂದ್ರಾವತಾರಿಯಾದ ಅರ್ಜುನನಿಗೆ ಶ್ರೀಕೃಷ್ಣನು ತನ್ನ ತಂಗಿಯಾದ ಸುಭದ್ರೆಯನ್ನು ವಿವಾಹ ಮಾಡಿಕೊಟ್ಟು ಮಗನಿಗೆ ಭಾವಮೈದುನನಾದನು.

## ಮಗಳಿಗೆ ಪತಿಯಾದ

ಭುದೇವಿಯು ಭೂವರಾಹನ ಪತ್ನಿಯಾಗಿರುವಳು. ಭೂದೇವಿಯ ಪುತ್ರಿಯಾದ ಸೀತೆಯೂ ಭೂವರಾಹನಿಗೂ ಪುತ್ರಿಯೇ ಸರಿ. ಈ ಪುತ್ರಿಯನ್ನು ಶ್ರೀರಾಮನು ವಿವಾಹವಾದ್ದರಿಂದ ಮಗಳಿಗೆ ಪತಿಯಾದನು.

## ಮಗಳಿಗೆ ಅಳಿಯನಾದ

ಗಂಗೆಯು ಭಗವಂತನ ಪಾದದಿಂದ ಹುಟ್ಟಿ ಮಗಳೆನಿಸಿದಳು. ಇವಳು ಸಮುದ್ರರಾಜನನ್ನು ವಿವಾಹವಾಗಿದ್ದಾಳೆ. ಸಮುದ್ರ ಮಂಥನ ಕಾಲದಲ್ಲಿ ಆವಿರ್ಭೂತಳಾದ ಶ್ರೀಲಕ್ಷ್ಮೀದೇವಿಯೂ ವರುಣನಿಗೆ ಪುತ್ರಿಯಾದಂತೆ ಗಂಗೆಗೂ ಪುತ್ರಿಯಾಗುವಳು. ಇವಳನ್ನು ವಿವಾಹವಾದ ಶ್ರೀಹರಿಯು ಮಗಳಾದ ಗಂಗೆಗೆ ಅಳಿಯನಾದನು.

## ಅಳಿಯಗಳಿಯನಾದ

ಶ್ರೀಹರಿಯ ಪಾದದಿಂದ ಸೃಷ್ಟಿಯಾದ ಗಂಗೆಯು ಶ್ರೀಹರಿಯ ಮಗಳು. ಗಂಗೆಯನ್ನು ವರುಣ ಮದುವೆ ಮಾಡಿಕೊಂಡಿದ್ದರಿಂದ ವರುಣನು ಶ್ರೀಹರಿಗೆ ಅಳಿಯನಾದನು. ಹೀಗೆ ಅಳಿಯನಾದ ಸಮುದ್ರರಾಜ ವರಣನ ಪುತ್ರಿಯಾದ ಲಕ್ಷ್ಮೀದೇವಿಯನ್ನು ಶ್ರೀಹರಿಗೆ ವಿವಾಹ ಮಾಡಿಕೊಟ್ಟಿದ್ದರಿಂದ ಭಗವಂತನು ವರುಣನಿಗೆ ಅಳಿಯನಾಗಿ ಅಳಿಯನಿಗೆ ಅಳಿಯನಾದನು.

## ಮಗಳ ಮಗಗೆ ಮೈದುನನಾದ

ಮಗಳು ಎಂದರೆ ಗಂಗೆ. ಅವಳ ಮಗನೆಂದರೆ ಸಮುದ್ರದಲ್ಲಿ ಹುಟ್ಟಿದ ಚಂದ್ರ. ಇವನು ಸಾಗರನ ಮಗನೂ ಹೌದು. ಅವನ ಜೊತೆಗೆ ಹುಟ್ಟಿದ ಲಕ್ಷ್ಮೀದೇವಿಯು ಚಂದ್ರನಿಗೆ ಅಕ್ಕ. ಇವಳನ್ನು ವಿವಾಹವಾಗಿ ಚಂದ್ರನಿಗೆ. ಭಾವಮೈದುನನಾದನು.

## ಮಾವನ ಜಗವರಿಯನು ಕೊಂದ ಕುಲಗೇಡಿ ಗೋವಳ

ನರಕಾಸುರನು ೧೬೦೦೦ ಸ್ತ್ರೀಯರನ್ನು ಬಂಧಿಸಿಟ್ಟು ತಂದೆಯಂತೆ ಸಾಕಿದ್ದರಿಂದ, ಈ ೧೬೦೦೦ ಸ್ತ್ರೀಯರನ್ನು ಶ್ರೀಕೃಷ್ಣನು ವಿವಾಹವಾಗಿದ್ದರಿಂದ ನರಕಾಸುರನು ಮಾವನಾದನು. ನರಕಾಸುರನನ್ನು ಶ್ರೀಕೃಷ್ಣನು ಕೊಂದಿದ್ದರಿಂದ ಮಾವನನ್ನೇ

ಕೊಂದವನಾದನು. ಹಾಗೂ ಮಾವನಾದ ಕಂಸನನ್ನು ಕೊಂದ ಎಂದು ಇನ್ನೊಂದು ಅರ್ಥವನ್ನೂ ಹೇಳಬಹುದು. ಈ ಎರಡು ಅರ್ಥವ್ರೂ ಇದಕ್ಕೆ ಪ್ರೂರಕವಾಗಿದೆ.

## ಅತ್ತೆಗೆ ವಲ್ಲಭನಾದ

ಅತ್ತೆಯಾದ ಭೂದೇವಿಗೆ ವರಾಹರೂಪದಿಂದ ವಲ್ಲಭನಾದವನು.

## ಭೃತ್ಯರಿಗಾಳಾದ

ಭೃತ್ಯರಾದ ಪಾಂಡವರಿಗೆ ಆಳಿನಂತೆ ಸಂಧಿಗೆ ಸೂತಕಾರ್ಯವನ್ನು ಕೈಗೊಂಡವನು.

## ಚಿತ್ತ ಒಲಿದು ಆದಿಕೇಶವನೊಳು

ಸುಂದರ ಹಾಗೂ ಎಲ್ಲರಿಗೂ ಆದಿಕಾರಣನಾದ, ಲೋಕ ವಿಭಿನ್ನನಾದ, ವಿಲಕ್ಷಣನಾದ ಸಕಲ ಗುಣಪ್ರೂರ್ಣನಾದ ಶ್ರೀಹರಿಗೆ ನೀನು ಚಿತ್ತ ಹರಿಸಿದ್ದು ಯುಕ್ತವೇ ಸರಿ.

## ಏನೇ ಮನವಿತ್ತೇ

ರಮಾ ಬ್ರಹ್ಮಾದಿಗಳಿಂದ ಮೊದಲ್ಗೊಂಡು ಸಕಲ ಸುರಾಸುರರಿಗೂ, ಸಕಲ ಚೇತನಾಚೇತನಗಳಿಗೂ, ಜಗತ್ತಿಗೆ ಹಿತನಾದ ಶ್ರೀಹರಿಗೆ ಮನವಿತ್ತೆ ಏನೇ?

## ಅಸಮಾನಗೋವಳ

ಶ್ರೀಗೋಪಾಲಕೃಷ್ಣನು ಎಲ್ಲರಂತೆ ಅಲ್ಲ. ಗೋಪಾಲನಂತೆ ಕಂಡರೂ ಅಪ್ರಾಕೃತ ಮತ್ತೂ ಜ್ಞಾನಾನಂದಾತ್ಮಕ ಶರೀರವ್ರುಳ್ಳ ಪರದೇವತೆಯಾಗಿರುವನು.

# ಕುಲವಿಲ್ಲದವನೊಳು

ಶ್ರೀಹರಿ ಎಂದ ಮಾತ್ರಕ್ಕೆ ಕುಲಗಳೆಲ್ಲವ್ರೂ ಪಾವನವಾಗುವದು. ಸಮಸ್ತ ಕುಲಗಳನ್ನು ಮೀರಿನಿಂತ ಶ್ರೀಹರಿಯು ಕುಲವೇ ಇಲ್ಲದವನು.

ಹರಿದಾಸರ ಮುಂಡಿಗೆಗಳು ಮೇಲ್ನೋಟಕ್ಕೆ ಶ್ರೀಹರಿಯನ್ನು ನಿಂದಿಸಿದಂತೆ ಕಂಡರೂ ಶ್ರೀಹರಿಯ ಸರ್ವೋತ್ತಮತ್ವವನ್ನೇ ಸಾರುತ್ತವೆ. ನಿಂದಾಸ್ತುತಿಯನ್ನು ಮಾಡಬೇಕಾದರೂ ತಾಕತ್ತು ಬೇಕು. ಆ ತಾಕತ್ತು ನಮ್ಮ ಎಲ್ಲಾ ಹರಿದಾಸರಲ್ಲೂ ಕಂಡು ಬರುತ್ತದೆ. ಹರಿದಾಸಸಾಹಿತ್ಯವು ವಿವಿಧ ಪ್ರಾಕಾರಗಳನ್ನೊಳಗೊಂಡಿದೆ. ಪದ-ಪದ್ಯ-ಸುಳಾದಿ-ಉಗಾಭೋಗ-ಷಟ್ಪದಿ-ಮುಂಡಿಗೆಗಳು. ಇದರಲ್ಲಿ ಪದ-ಪದ್ಯಗಳ ಬಗ್ಗೆ ಮಾತ್ರ ಎಲ್ಲರೂ ಮಾತನಾಡುತ್ತಾರೆ ಮತ್ತೂ ಲೇಖನಗಳನ್ನು ಬರೆಯುತ್ತಾರೆ. ಆದರೇ ಯಾರೂ ಮಿಕ್ಕ ವಿಷಯಗಳ ಬಗ್ಗೆ ಹೆಚ್ಚು ಗಮನ ಹರಿಸುತ್ತಿಲ್ಲ.

ಬೆರಳೆಣಿಕೆಯಷ್ಟು ವಿದ್ವಾಂಸರುಗಳು ಮಾತ್ರ ಈ ಕುರಿತು ಪರಿಶ್ರಮ ಪಡುತ್ತಿದ್ದಾರೆ. ಆದ್ದರಿಂದ ಎಲ್ಲಾ ಜಿಜ್ಞಾಸುಗಳು ಹರಿದಾಸಸಾಹಿತ್ಯದ ಎಲ್ಲಾ ಪ್ರಾಕಾರಗಳನ್ನು ಪ್ರಚಾರ ಮಾಡಿದಾಗ್ಗೆ ಮಾತ್ರ ಹರಿದಾಸಸಾಹಿತ್ಯ ಕ್ಷೇತ್ರವು ಎಲ್ಲರ ಮನಮುಟ್ಟುತ್ತದೆ. ಈ ನಿಟ್ಟಿನಲ್ಲಿ ಎಲ್ಲಾ ಹರಿದಾಸ ಬಂಧುಗಳು ಕೃಷಿಪಡಬೇಕಾಗಿ ಈ ಪರಿಮಳದ ಪತ್ರಿಕೆಯ ಮುಖಾಂತರ ವಿನಮ್ರನಾಗಿ ವಿಜ್ಞಾಪಿಸಿಕೊಳ್ಳುತ್ತಿದ್ದೇನೆ.

ಯಮಾಂಶಸ್ಯ ಪರಾಭಕ್ತ್ಯಾ ಸುಪ್ರಸನ್ನೋ ಹರಿಃ ಸ್ವಯಂ |
ಯಸ್ಯಾಚಾರ್ಯೋ ವ್ಯಾಸರಾಯಃ ತಂ ವಂದೇ ಕನಕಾಭಿದಂ ||